ಸೂ. 19 **87. ಅಲ್ ಅಅ್‌ಲಾ** ರು. 1



**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. (ಸಂದೇಶವಾಹಕರೇ) ನಿಮ್ಮ ಸರ್ವೋನ್ನತ ಪ್ರಭುವಿನ ನಾಮವನ್ನು ಜಪಿಸಿರಿ,

سَبِّحِ اسۡمَ رَبِّكَ الۡاَعۡلَىۙ ١

2. ಅವನು ಸೃಷ್ಟಿಸಿದನು ಮತ್ತು ಸಂತುಲಿತಗೊಳಿಸಿದನು.[1]

الَّذِىۡ خَلَقَ فَسَوّٰىۙ ٢

3. ಅವನು ವಿಧಿಯನ್ನು ನಿರ್ಣಯಿಸಿದನು.[2] ಆಮೇಲೆ ಮಾರ್ಗದರ್ಶನ ಮಾಡಿದನು.[3]

وَالَّذِىۡ قَدَّرَ فَهَدٰىۙ ٣

4. ಅವನು ಸಸ್ಯಗಳನ್ನು ಬೆಳೆಸಿದನು-

وَالَّذِىۡۤ اَخۡرَجَ الۡمَرۡعٰىۙ ٤

5. ತರುವಾಯ ಅವುಗಳನ್ನು ಕಪ್ಪು ಕಸಕಡ್ಡಿಗಳಾಗಿ ಮಾಡಿಬಿಟ್ಟನು.

فَجَعَلَهٗ غُثَآءً اَحۡوٰىؕ ٥

6. ನಾವು ನಿಮಗೆ ಓದಿಸಿ ಬಿಡುವೆವು. ಆ ಬಳಿಕ ನೀವು ಮರೆತು ಬಿಡಲಾರಿರಿ-[4]

سَنُقۡرِئُكَ فَلَا تَنۡسٰٓىۙ ٦

---

1. ಅರ್ಥಾತ್- ಭೂಮಿಯಿಂದ ಆಕಾಶದ ತನಕವಿರುವ ನಿಸರ್ಗದ ಸಮಸ್ತ ವಸ್ತುಗಳನ್ನು ಸೃಷ್ಟಿಸಿದನು. ಸೃಷ್ಟಿಸಿರುವ ಪ್ರತಿಯೊಂದು ವಸ್ತುವನ್ನೂ ಸಮರ್ಪಕವಾಗಿ ಮತ್ತು ಸರಿಯಾಗಿ ಸೃಷ್ಟಿಸಿದನು. ಅವುಗಳಲ್ಲಿ ಸಮತೋಲನವನ್ನು ಸರಿಯಾಗಿ ಸ್ಥಾಪಿಸಿದನು. ಅವುಗಳನ್ನು ಎಂತಹ ಸ್ವರೂಪದಲ್ಲಿ ಸೃಷ್ಟಿಸಿದನೆಂದರೆ ಅಂತಹ ಸಾಧನಕ್ಕೆ ಅದಕ್ಕಿಂತ ಉತ್ತಮ ಸ್ವರೂಪವನ್ನು ಕಲ್ಪಿಸಲಿಕ್ಕೂ ಸಾಧ್ಯವಿಲ್ಲ.
2. ಅರ್ಥಾತ್- ಪ್ರತಿಯೊಂದು ವಸ್ತುವನ್ನು ಸೃಷ್ಟಿಸುವುದಕ್ಕೆ ಮೊದಲೇ ಅದಕ್ಕೆ ಭೂಮಿಯಲ್ಲಿ ಯಾವ ಕೆಲಸ ಮಾಡಬೇಕಾಗಿದೆ, ಈ ಕೆಲಸ ಮಾಡಲು ಅದರ ಪ್ರಮಾಣ ಎಷ್ಟಿರಬೇಕು. ಸ್ವರೂಪ ಹೇಗಿರಬೇಕು, ಗುಣವಿಶೇಷತೆಗಳು ಏನಾಗಿರಬೇಕು, ಅದರ ನೆಲೆ ಎಲ್ಲಿರಬೇಕು, ಅದರ ಉಳಿವು, ನೆಲೆ ನಿಲ್ಲುವಿಕೆ ಮತ್ತು ಸಕ್ರಿಯತೆಗಾಗಿ ಯಾವ ಮೂಲ ಮತ್ತು ಅವಕಾಶಗಳನ್ನೊದಗಿಸಬೇಕು, ಯಾವ ಸಂದರ್ಭದಲ್ಲಿ ಅದು ಅಸ್ತಿತ್ವಕ್ಕೆ ಬರಬೇಕು, ಎಲ್ಲಿಯ ವರೆಗೆ ತನ್ನ ಪಾಲಿನ ಕೆಲಸ ಮಾಡಬೇಕು ಮತ್ತು ಯಾವಾಗ ನಾಶವಾಗಬೇಕು ಎಂಬುದನ್ನೆಲ್ಲಾ ಗೊತ್ತುಪಡಿಸಿದನು. ಈ ಸಮಗ್ರ ಯೋಜನೆಯ ಹೆಸರು ಅವನ 'ತಕ್‌ದೀರ್' ಅಥವಾ ವಿಧಿ ಎಂದಾಗಿದೆ.
3. ಅರ್ಥಾತ್- ಯಾವ ವಸ್ತುವನ್ನೂ ಸೃಷ್ಟಿಸಿ ಹಾಗೆಯೇ ಬಿಟ್ಟು ಬಿಟ್ಟಿಲ್ಲ. ಬದಲಾಗಿ ಅವನು ಯಾವ ಕೆಲಸಕ್ಕಾಗಿ ಯಾವ ವಸ್ತುವನ್ನು ಸೃಷ್ಟಿಸಿದನೋ ಅದಕ್ಕೆ ಆ ಕೆಲಸ ಮಾಡುವ ವಿಧಾನವನ್ನೂ ಕಲಿಸಿದನು.
4. ಆರಂಭ ಕಾಲದಲ್ಲಿ ವಹೀ ಅವತೀರ್ಣಗೊಳ್ಳುತ್ತಿದ್ದಾಗ, ಕೆಲವೊಮ್ಮೆ ಜಿಬ್‌ರೀಲ್(ಅ) ವಹ್ಯ್‌ಯನ್ನು ಕೇಳಿಸಿ ವಿರಮಿಸುವುದಕ್ಕೆ ಮೊದಲೇ ಮರೆತು ಹೋಗುವ ಭಯದಿಂದ ಪ್ರವಾದಿವರ್ಯರು(ಸ) ಅದರ ಆರಂಭಿಕ ಭಾಗವನ್ನು ಪುನರಾವರ್ತಿಸಲಾರಂಭಿಸುತ್ತಿದ್ದರು. ಆದ್ದರಿಂದಲೇ ಅಲ್ಲಾಹನು ಪ್ರವಾದಿವರ್ಯರನ್ನು(ಸ) ಸಮಾಧಾನ ಪಡಿಸುತ್ತಾ ಹೀಗೆಂದಿದ್ದಾನೆ, 'ವಹೀ ಅವತೀರ್ಣಗೊಳ್ಳುವಾಗ ನೀವು

| | | |
|---|---|---|
| 7. | ಅಲ್ಲಾಹನು ಇಚ್ಛಿಸಿದ್ದರ ಹೊರತು.[5] ಅವನು ವ್ಯಕ್ತವಾಗಿರುವುದನ್ನೂ ಗುಪ್ತವಾಗಿರುವುದನ್ನೂ ಬಲ್ಲನು. | إِلَّا مَا شَاءَ اللَّهُ ۚ إِنَّهُ يَعْلَمُ الْجَهْرَ وَمَا يَخْفَىٰ ⑦ |
| 8. | ನಾವು ನಿಮಗೆ ಸರಳ ವಿಧಾನದ ಸೌಲಭ್ಯ ನೀಡುತ್ತೇವೆ. | وَنُيَسِّرُكَ لِلْيُسْرَىٰ ⑧ |
| 9. | ಆದುದರಿಂದ ಉಪದೇಶದಿಂದ ಪ್ರಯೋಜನವಾಗುವುದಿದ್ದರೆ ನೀವು ಉಪದೇಶ ನೀಡಿರಿ.[6] | فَذَكِّرْ إِنْ نَفَعَتِ الذِّكْرَىٰ ⑨ |
| 10. | ಭಯಭಕ್ತಿಯುಳ್ಳವನು ಉಪದೇಶವನ್ನು ಸ್ವೀಕರಿಸಿಕೊಳ್ಳುವನು- | سَيَذَّكَّرُ مَنْ يَخْشَىٰ ⑩ |
| 11. | ಮತ್ತು ಅದರಿಂದ ದೂರವುಳಿಯುವವನು ಅತ್ಯಂತ ಭಾಗ್ಯಹೀನನು- | وَيَتَجَنَّبُهَا الْأَشْقَى ⑪ |
| 12. | ಅವನು ಘೋರ ಅಗ್ನಿಯಲ್ಲಿ ಬೀಳುವನು. | الَّذِي يَصْلَى النَّارَ الْكُبْرَىٰ ⑫ |
| 13. | ಅನಂತರ ಅವನು ಅದರಲ್ಲಿ ಸಾಯಲಿಕ್ಕೂ ಇಲ್ಲ, ಬದುಕಲಿಕ್ಕೂ ಇಲ್ಲ. | ثُمَّ لَا يَمُوتُ فِيهَا وَلَا يَحْيَىٰ ⑬ |
| 14. | ಪಾವಿತ್ರ್ಯವನ್ನು ಕೈಗೊಂಡವನು ಯಶಸ್ವಿಯಾಗಿ ಬಿಟ್ಟನು. | قَدْ أَفْلَحَ مَنْ تَزَكَّىٰ ⑭ |
| 15. | ತನ್ನ ಪ್ರಭುವಿನ ನಾಮವನ್ನು ಸ್ಮರಿಸಿದವನು ಮತ್ತು ನಮಾಝ್ ಮಾಡಿದವನು. | وَذَكَرَ اسْمَ رَبِّهِ فَصَلَّىٰ ⑮ |
| 16. | ಆದರೆ ನೀವು ಇಹಲೋಕ ಜೀವನಕ್ಕೆ ಆದ್ಯತೆ ಕೊಡುತ್ತೀರಿ. | بَلْ تُؤْثِرُونَ الْحَيَاةَ الدُّنْيَا ⑯ |
| 17. | ವಸ್ತುತಃ ಪರಲೋಕವು ಹೆಚ್ಚು ಉತ್ತಮವೂ ಶಾಶ್ವತವೂ ಆಗಿದೆ. | وَالْآخِرَةُ خَيْرٌ وَأَبْقَىٰ ⑰ |
| 18. | ಇದನ್ನೇ ಹಿಂದೆ ಬಂದಿದ್ದ ಗ್ರಂಥಗಳಲ್ಲಿ ಹೇಳಲಾಗಿತ್ತು- | إِنَّ هَٰذَا لَفِي الصُّحُفِ الْأُولَىٰ ⑱ |
| 19. | ಇಬ್‌ರಾಹೀಮ್ ಮತ್ತು ಮೂಸಾರ ಗ್ರಂಥಗಳಲ್ಲಿ. | صُحُفِ إِبْرَاهِيمَ وَمُوسَىٰ ⑲ |

ಮೌನವಾಗಿ ಅದನ್ನು ಕೇಳುತ್ತೀರಿ. ನಾವು ನಿಮಗೆ ಓದಿಸಿ ಬಿಡುವೆವು ಆ ಬಳಿಕ ನೀವು ಮರೆಯಲಾರಿರಿ'.

5. ಅರ್ಥಾತ್- ಸಮಸ್ತ ಕುರ್‌ಆನಿನ ಒಂದು ಪದವೂ ಬಿಟ್ಟು ಹೋಗದಂತೆ ತಮ್ಮ ನೆನಪಿನಲ್ಲುಳಿಯುವುದು ತಮ್ಮ ಸಾಮರ್ಥ್ಯದಿಂದಾಗಿಯಲ್ಲ. ಬದಲಾಗಿ ಅದು ಅಲ್ಲಾಹನ ಅನುಗ್ರಹ ಮತ್ತು ಸೌಭಾಗ್ಯದ ಪರಿಣಾಮವಾಗಿದೆ. ಅನ್ಯಥಾ ಅಲ್ಲಾಹನು ಬಯಸಿದ್ದರೆ ಅದನ್ನು ಮರೆಸುತ್ತಿದ್ದನು.

6. ಅರ್ಥಾತ್- ಧರ್ಮಪ್ರಚಾರ ಕಾರ್ಯದ ಮೂಲಕ ನಾವು ನಿಮ್ಮನ್ನು ಯಾವುದೇ ರೀತಿಯ ಸಂಕಷ್ಟಕ್ಕೀಡು ಮಾಡ ಬಯಸುವುದಿಲ್ಲ. ಕಿವುಡರಿಗೆ ಕೇಳಿಸಲು ಅಥವಾ ಅಂಧರಿಗೆ ದಾರಿಗಾಣಿಸಲು ನಾವು ಹೇಳುವುದಿಲ್ಲ. ಲಭ್ಯವಿರುವ ಸರಳ ಮಾರ್ಗವೊಂದನ್ನು ನಾವು ನಿಮಗೆ ಗೊತ್ತು ಪಡಿಸುತ್ತೇವೆ. ಅದೇನೆಂದರೆ ಯಾರಾದರೂ ಉಪದೇಶದಿಂದ ಪ್ರಯೋಜನ ಪಡೆಯುತ್ತಾರೆಂದು ನಿಮಗೆ ಭಾಸವಾದರೆ ಉಪದೇಶಿಸಿರಿ. ಉಪದೇಶ ಸ್ವೀಕರಿಸಲು ಸಿದ್ಧರಿಲ್ಲವೆಂದು ಸ್ವಾನುಭವದಿಂದ ನಿಮಗೆ ತಿಳಿದು ಬಂದಿರುವಂತಹ ವ್ಯಕ್ತಿಗಳ ಹಿಂದೆ ಬೀಳುವ ಯಾವ ಅವಶ್ಯಕತೆಯೂ ನಿಮಗಿಲ್ಲ.